ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಅರಣ್ಯ ಇಲಾಖೆಯಲ್ಲಿ ಅಧಿಕಾರಿ/ನೌಕರರುಗಳ ಜೇಷ್ಠತಾ ಪಟ್ಟಿಯನ್ನು ಪರಿಷ್ಕರಿಸಿರುವ ಬಗ್ಗೆ

ಶ್ರೀ ಪ್ರಕಾಶ್ ಕೆ. ರಾಥೋಡ್(ನಾಮನಿರ್ದೇಶನ ಹೊಂದಿದವರು) –

49 (31) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದ ಅರಣ್ಯ ಇಲಾಖೆಯಲ್ಲಿ ಎಷ್ಟು ವಲಯಗಳಿವೆ; ಯಾವ ಯಾವ ವಲಯದಲ್ಲಿ ಎಷ್ಟು ಗಾರ್ಡ್, ಡಿವೈಆರ್‌ಎಫ್‌ಓಗಳು, ಆರ್‌ಎಫ್‌ಓ, ಡಿಎಫ್‌ಓಗಳು, ಸಿಸಿಎಫ್‌ಗಳು, ಪಿಸಿಸಿಎಫ್‌ಗಳು ಕಾರ್ಯ ನಿರ್ವಹಿಸುತ್ತಿದ್ದಾರೆ; (ವಲಯವಾರು ಮಾಹಿತಿ ನೀಡುವುದು)

(ಆ) ಈ ವರ್ಗಗಳ ಜೇಷ್ಠತಾ ಪಟ್ಟಿಯನ್ನು ವಲಯವಾರು ಮಾಡಲಾಗಿದೆಯೇ; ಅಥವಾ ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿ ಮಾಡಲಾಗಿದೆಯೇ; ಅನುಸರಿಸುವ ಮಾನದಂಡಗಳಾವುವು;

(ಇ) ಯಾವುದೇ ವರ್ಗ ಜೇಷ್ಠತಾ ಪಟ್ಟಿ ಅಂತಿಮಗೊಳಿಸಿ ಅಧಿಸೂಚನೆ ಹೊರಡಿಸಿದ ಮೇಲೆ ಜೇಷ್ಠತಾ ಪಟ್ಟಿ ಬದಲಾಯಿಸಲು ಸರ್ಕಾರ ಅಥವಾ ಅಧಿಕಾರಿಗಳಿಗೆ ಕಾನೂನುನಲ್ಲಿ ಅವಕಾಶಗಳಿದೆಯೇ; (ವಿವರ ನೀಡುವುದು)

(ಈ) ಅಧಿಕಾರ ಇಲ್ಲದಿದ್ದರೂ, ಡಿವೈಆರ್‌ಎಫ್‌ಓಗಳ ಜೇಷ್ಠತಾ ಪಟ್ಟಿಯನ್ನು ಬೆಂಗಳೂರು ವಲಯದಲ್ಲಿ ಏತಕ್ಕಾಗಿ 2ನೇ ಭಾರಿ ಮಾಡಲಾಗಿದೆ; ಅದರಲ್ಲಿ ಕಿರಿಯ ಯಾರನ್ನು ಹಿರಿಯರನ್ನಾಗಿ ಹಿರಿಯರನ್ನು ಕಿರಿತಯನ್ನಾಗಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಅದನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು?